# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 110
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
ಉತ್ತರಿಸುವ ದಿನಾಂಕ : 15.07.2019
ಉತ್ತರಿಸುವವರು : ಸಮಾಜ ಕಲ್ಯಾಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿ ಎಷ್ಟು ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ; (ಜಿಲ್ಲಾವಾರು ವಿವರ ನೀಡುವುದು) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿ 824 ವಸತಿ ಶಾಲೆ/ಕಾಲೇಜುಗಳು ಕರ್ತವ್ಯ ನಿರ್ವಹಿಸುತ್ತಿದ್ದು ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| (ಆ) | ಈ ಹಿಂದೆ ಸಂಘದ ಅಧೀನದಲ್ಲಿರುವ ಅಲ್ಪ ಸಂಖ್ಯಾತ ವಸತಿ ಶಾಲೆಗಳನ್ನು ಪ್ರತ್ಯೇಕಿಸಿ ಇಲಾಖೆಯೊಂದಿಗೆ ವಿಲೀನಗೊಳಿಸಿದ್ದು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಹಾಗೂ ಇತರೆ ಹಿಂದುಳಿದ ವರ್ಗಗಳ ಮಕ್ಕಳನ್ನು ಮಾತ್ರ ಇದೇ ಸಂಸ್ಥೆಯೊಂದಿಗೆ ಸೇರಿಸಿರುವುದರಿಂದ ಇದನ್ನು ಒಂದು ನಿಗಮ/ಮಂಡಳಿಯಂತೆ ಪರಿಗಣಿಸುತ್ತಿರುವುದರಿಂದ ಅಲ್ಲಿನ ಸಿಬ್ಬಂದಿಯವರು ಅಸಮಧಾನ ವ್ಯಕ್ತಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ) | ಮಾಹಿತಿಯ ಪ್ರಕಾರ 145 ಶಾಲೆಗಳಿಗೆ ಮೂಲಭೂತ ಸೌಲಭ್ಯಗಳಿಲ್ಲದಿರುವುದು ಹಾಗೂ ಮಕ್ಕಳಿಗೆ ಕೊಡಲು ಸರ್ಕಾರ ಡೆಸ್ಕ್ – ಬೆಂಚ್ ನೀಡಿಲ್ಲವೆಂದು ವರದಿಯಾಗಿರುವುದು ನಿಜವೆ; | 145 ಹೊಸ ವಸತಿ ಶಾಲೆಗಳನ್ನು 2017-18ನೇ ಸಾಲಿನಲ್ಲಿ ಬಾಡಿಗೆ ಕಟ್ಟಡಗಳಲ್ಲಿ 6ನೇ ತರಗತಿಯನ್ನು 50 ವಿದ್ಯಾರ್ಥಿಗಳ ಸಂಖ್ಯಾಬಲದೊಂದಿಗೆ ಪ್ರಾರಂಭಿಸಲಾಗಿದೆ. ಸದರಿ ಶಾಲೆಗಳಿಗೆ ಪೀಠೋಪಕರಣ, ಡೆಸ್ಕ್ ಬೆಂಚ್ ಖರೀದಿಸಲು ಟೆಂಡರ್ ಕರೆದಿದ್ದು, ನ್ಯಾಯಾಲಯ ಪ್ರಕರಣವಿದ್ದುದರಿಂದ ಹಾಗೂ ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿದ್ದುದರಿಂದ ತಡವಾಗಿದ್ದು, ಪ್ರಸ್ತುತ ಖರೀದಿಸಲು ಟೆಂಡರ್ ಕರೆಯಲಾಗಿದೆ. |
| (ಈ) | ಬಡ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳ ಪ್ರತಿಭಾವಂತ ಮಕ್ಕಳಿಗೆ ಪ್ರವೇಶಾತಿಯನ್ನು ಒದಗಿಸಿ ಅವರಿಗೆ ಸೌಲಭ್ಯ ಕೊಡದಿದ್ದಲ್ಲಿ ಇದು ಸಾಮಾಜಿಕ ಅನ್ಯಾಯವಾಗುವುದಿಲ್ಲವೇ; | ಈ ವಸತಿ ಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಹಂತ ಹಂತವಾಗಿ ಅನುದಾನದ ಲಭ್ಯತೆಯನ್ನಾಧರಿಸಿ ಪೂರೈಕೆ ಮಾಡಲು ಕ್ರಮವಹಿಸಿದೆ. |

| | | |
|---|---|---|
| (ಉ) | ಈ ಸಮಸ್ಯೆಗಳ ಸುಧಾರಣೆಗೆ ಸರ್ಕಾರ ಕೈಗೊಂಡ ಕ್ರಮವೇನು? | ವಸತಿ ಶಾಲೆ/ ಕಾಲೇಜುಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳ ಪೂರೈಕೆಗೆ ಈ ಕೆಳಕಂಡಂತೆ ಕ್ರಮವಹಿಸಿದೆ.<br>1) 2018-19 ನೇ ಸಾಲಿನಲ್ಲಿ ವಸತಿ ಶಾಲಾ/ ಕಾಲೇಜುಗಳ ವಿದ್ಯಾರ್ಥಿಗಳಿಗೆ ರೂ. 23.71 ಕೋಟಿಗಳಲ್ಲಿ 54000 ಹಾಸಿಗೆ ಮತ್ತು 58000 ದಿಂಬುಗಳನ್ನು ಸರಬರಾಜು ಮಾಡಲಾಗಿದೆ.<br>2) 2018-19 ನೇ ಸಾಲಿನಲ್ಲಿ ನರ್ಸಿಂಗ್ ಕಿಟ್‌ಗಳನ್ನು ರೂ.1.11 ಕೋಟಿಗಳ ವೆಚ್ಚದಲ್ಲಿ ಟೆಂಡರ್ ಕರೆದು 411 ವಸತಿ ಶಾಲಾ/ ಕಾಲೇಜುಗಳಿಗೆ ಸರಬರಾಜು ಮಾಡಲಾಗಿದೆ.<br>3) 2018-19 ನೇ ಸಾಲಿನಲ್ಲಿ ವಸತಿ ಶಾಲಾ/ ಕಾಲೇಜುಗಳ ವಿದ್ಯಾರ್ಥಿಗಳಿಗೆ ಶಾಲಾ ಬ್ಯಾಗ್‌ಗಳನ್ನು ರೂ. 8.07 ಕೋಟಿಗಳಲ್ಲಿ ಸರಬರಾಜು ಮಾಡಲಾಗಿದೆ.<br>4) 2018-19ನೇ ಸಾಲಿನಲ್ಲಿ ಸ್ವಂತ ಕಟ್ಟಡದಲ್ಲಿರುವ 384 ವಸತಿ ಶಾಲಾ/ ಕಾಲೇಜುಗಳಿಗೆ ಸಿಸಿ ಕ್ಯಾಮರಗಳನ್ನು ರೂ.10.95 ಕೋಟಿಗಳ ವೆಚ್ಚದಲ್ಲಿ ಖರೀದಿಸಿ ಸರಬರಾಜು ಮಾಡಲಾಗಿದೆ.<br><br>2019-20 ನೇ ಸಾಲಿನಲ್ಲಿ ವಸತಿ ಶಾಲಾ / ಕಾಲೇಜುಗಳಿಗೆ ಪೀಠೋಪಕರಣಗಳನ್ನು, ಡೈನಿಂಗ್ ಟೇಬಲ್‌ಗಳನ್ನು ಮತ್ತು ಸೋಲಾರ್ ವಾಟರ್ ಹೀಟರ್‌ಗಳನ್ನು ಪೂರೈಕೆ ಮಾಡಲು ಒಟ್ಟು ರೂ.112.99 ಕೋಟಿಗಳ ವೆಚ್ಚದಲ್ಲಿ ಟೆಂಡರ್ ಕರೆದು ಕ್ರಮವಹಿಸಲಾಗಿದೆ. |

ಸಕಇ 84 ಮೊದೇಶಾ 2019

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು.

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: (110)
22 ಕ್ಕೆ ಅನುಬಂಧ

| ಕ್ರ.ಸ. | ಜಿಲ್ಲೆಯ ಹೆಸರು | ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 5 |
| 2 | ಬೆಂಗಳೂರು ಗ್ರಾಮೀಣ | 12 |
| 3 | ಚಿಕ್ಕಬಳ್ಳಾಪುರ | 22 |
| 4 | ಚಿತ್ರದುರ್ಗ | 36 |
| 5 | ದಾವಣಗೆರೆ | 23 |
| 6 | ಕೋಲಾರ | 26 |
| 7 | ರಾಮನಗರ | 23 |
| 8 | ಶಿವಮೊಗ್ಗ | 32 |
| 9 | ತುಮಕೂರು | 53 |
| 10 | ಚಾಮರಾಜನಗರ | 22 |
| 11 | ಚಿಕ್ಕಮಗಳೂರು | 35 |
| 12 | ದಕ್ಷಿಣ ಕನ್ನಡ | 11 |
| 13 | ಹಾಸನ | 38 |
| 14 | ಕೊಡಗು | 9 |
| 15 | ಮಂಡ್ಯ | 38 |
| 16 | ಮೈಸೂರು | 37 |
| 17 | ಉಡುಪಿ | 9 |
| 18 | ಬಾಗಲಕೋಟೆ | 30 |
| 19 | ವಿಜಯಪುರ | 23 |
| 20 | ಬೆಳಗಾವಿ | 54 |
| 21 | ಧಾರವಾಡ | 15 |
| 22 | ಗದಗ | 16 |
| 23 | ಹಾವೇರಿ | 28 |
| 24 | ಉತ್ತರ ಕನ್ನಡ | 24 |
| 25 | ಬಳ್ಳಾರಿ | 43 |
| 26 | ಬೀದರ್. | 29 |
| 27 | ಕಲಬುರಗಿ | 45 |
| 28 | ಕೊಪ್ಪಳ | 29 |
| 29 | ರಾಯಚೂರು | 36 |
| 30 | ಯಾದಗಿರಿ | 21 |
| ಒಟ್ಟು | | 824 |